# ಶಿಕ್ಷಣಕ್ಕಾಗಿ ಪರೀಕ್ಷೆಯೇ ಹೊರತು ಪರೀಕ್ಷೆಗಾಗಿ ಶಿಕ್ಷಣವಲ್ಲ

***ಅನುರಾಗ್ ಬೆಹರ್***

ಮಂಡಳಿ ಪರೀಕ್ಷೆಗಳು ಭಾರತೀಯ ಶಿಕ್ಷಣ ವ್ಯವಸ್ಥೆಯನ್ನು ಬಾಧಿಸುತ್ತಿರುವ ಪ್ರಮುಖ ಸಮಸ್ಯೆಗಳಲ್ಲಿ ಒಂದೆನಿಸಿವೆ. ಶಾಲಾ ಶಿಕ್ಷಣಕ್ಕಾಗಿ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು 2023 (ಎನ್.ಸಿ.ಎಫ್), ಪ್ರಸ್ತುತ ಸಮಸ್ಯೆಗಳಿಂದ ಪಲಾಯನ ಮಾಡುವುದರ ಬದಲಿಗೆ ಸ್ಪಷ್ಟವಾಗಿ ಗುರುತಿಸುವ ಮೂಲಕ ಈ ವಿಷಯವನ್ನು ನೇರವಾಗಿ ಎದುರಿಸುತ್ತದೆ.

ವಿದ್ಯಾರ್ಥಿಗಳು ಮತ್ತು ಅವರ ಕುಟುಂಬದ ಸದಸ್ಯರ ನಡುವೆ ಮಂಡಳಿ ಪರೀಕ್ಷೆಗಳು ಉಂಟು ಮಾಡುವ ಒತ್ತಡವು ಮೊದಲ ದೊಡ್ಡ ಸಮಸ್ಯೆ ಎನಿಸಿದೆ. ಇದರ ಹಿಂದೆ ಅನೇಕ ಕಾರಣಗಳಿವೆ. ಅವುಗಳೆಂದರೆ: ಪರೀಕ್ಷೆಯ ಅಂಕಗಳನ್ನು ಸಾಮಾಜಿಕವಾಗಿ 'ಆಂತರಿಕ ಮೌಲ್ಯ'ವೆಂದು ಪರಿಗಣಿಸಲಾಗುತ್ತದೆ ಮತ್ತು ಇದು ಬದುಕನ್ನೇ ಬದಲಾಯಿಸುವ ಪರಿಣಾಮಗಳನ್ನು ಹೊಂದಿದೆ ಎಂಬುದಾಗಿ ನಂಬಲಾಗುತ್ತದೆ. ಈ ಪರೀಕ್ಷೆಗಳ ಫಲಿತಾಂಶಗಳನ್ನು ಕಾಲೇಜಿನ ಶಿಕ್ಷಣದ ಪ್ರವೇಶಕ್ಕೆ ಅಥವಾ ಕೆಲವೊಮ್ಮೆ ಉದ್ಯೋಗ ಪಡೆಯಲು ಬಳಸಲಾಗುತ್ತದೆ. ಅಲ್ಲದೆ ಪರೀಕ್ಷೆಯ ವೇಳೆ ಕೇವಲ ಒಂದು ದಿನದಲ್ಲಿ ಕಳಪೆ ಸಾಧನೆ ಮಾಡಿದರೆ ಗಂಭೀರ ಪರಿಣಾಮಗಳು ಉಂಟಾಗುತ್ತವೆ. ಜೊತೆಗೆ ಕೋಚಿಂಗ್ ಮತ್ತು ಟ್ಯೂಷನ್ ನಿಂದ ಹಣ ಗಳಿಸುವುದಕ್ಕಾಗಿ ಕೃತಕ ಸ್ಪರ್ಧಾತ್ಮಕ ಒತ್ತಡವನ್ನು ಉಂಟು ಮಾಡುವ ವಾಣಿಜ್ಯ ಹಿತಾಸಕ್ತಿಗಳು ಸಹ ಈ ಪಟ್ಟಿಯಲ್ಲಿ ಸೇರಿವೆ.

ಎರಡನೆಯದಾಗಿ, ಹೆಚ್ಚಿನ ಮಂಡಳಿ ಪರೀಕ್ಷೆಗಳು ತಮ್ಮ ಪ್ರಾಥಮಿಕ ಉದ್ದೇಶವನ್ನು ಈಡೇರಿಸುವುದಿಲ್ಲ. ಬೇಸರದ ವಿಷಯವೇನೆಂದರೆ ಶಾಲೆಯಲ್ಲಿ ಹೆಚ್ಚಿನ ಶೈಕ್ಷಣಿಕ ಪ್ರಯತ್ನಕ್ಕೆ ಇವು ತಪ್ಪು ಮಾರ್ಗದರ್ಶನ ನೀಡುತ್ತವೆ. ಈ ಪರೀಕ್ಷೆಗಳು 10 ಮತ್ತು 12ನೇ ತರಗತಿಗಳ ಕೊನೆಗೆ ವಿದ್ಯಾರ್ಥಿಗಳು ಗಳಿಸುವ ಸಾಮರ್ಥ್ಯವನ್ನು ದೃಢೀಕರಿಸಬೇಕಿತ್ತು. ಬದಲಾಗಿ, ಹೆಚ್ಚಿನ ಪರೀಕ್ಷೆಗಳು, ವಿಷಯಗಳ ದೊಡ್ಡ ಕಂತೆಯನ್ನು ನೆನಪಿಡುವ ಸಾಮರ್ಥ್ಯವನ್ನಷ್ಟೇ ಪರೀಕ್ಷೆಗೆ ಒಳಪಡಿಸುತ್ತವೆ. ಈ ಮೂಲಭೂತ ತಪ್ಪು ಹೊಂದಾಣಿಕೆಯು ಶೋಚನೀಯವಾಗಿ ವಿದ್ಯಾರ್ಥಿಯ ಕಲಿಕೆಯ ಅಪೂರ್ಣ (ಹೆಚ್ಚೆಂದರೆ) ಅಥವಾ ಕೆಟ್ಟ ಪರಿಣಾಮದಿಂದಾಗಿ ತಪ್ಪು ಚಿತ್ರಣವನ್ನು ನೀಡುತ್ತದೆ. ಮೂರನೆಯದಾಗಿ, ಹೆಚ್ಚಿನ ಪರೀಕ್ಷಾ ಸಾಧನಗಳನ್ನು ಕಳಪೆಯಾಗಿ ವಿನ್ಯಾಸಗೊಳಿಸಲಾಗಿದೆ. ಇದು ಮೌಲ್ಯಮಾಪಕರು ಮತ್ತು ಒಟ್ಟಾರೆ ಅಸಂಗತತೆಯ ನಡುವೆ ಸ್ವೀಕಾರಾರ್ಹವಲ್ಲದ ವ್ಯತ್ಯಯಕ್ಕೆ ಕಾರಣವೆನಿಸುತ್ತದೆ. ಸಂಕ್ಷಿಪ್ತವಾಗಿ: ನಮ್ಮ ಅನೇಕ ಮಂಡಳಿ ಪರೀಕ್ಷೆಗಳು ಕಳಪೆ ಮಟ್ಟದ ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯನ್ನು ಹೊಂದಿವೆ.

ತಪ್ಪಾಗಿ ನಿರ್ದೇಶಿಸಲ್ಪಟ್ಟ ಪರೀಕ್ಷಾ ವಿನ್ಯಾಸವು, ಬೋಧನೆ ಮತ್ತು ತರಗತಿ ಕೋಣೆ ಅಥವಾ ಶಾಲಾ ಅಭ್ಯಾಸಗಳಿಂದ ಪಠ್ಯ ಪುಸ್ತಕಗಳ ತನಕ ಶಿಕ್ಷಣದ ಎಲ್ಲ ಅಂಶಗಳನ್ನು ಗೌಣವಾಗಿಸುತ್ತದೆ. ಇವೆಲ್ಲವೂ ನೈಜ ಕಲಿಕೆ ಮತ್ತು ಸಾಮರ್ಥ್ಯ ಮತ್ತು ಪಠ್ಯಕ್ರಮದ ಗುರಿಯನ್ನು ಸಾಧಿಸುವ ಬದಲಿಗೆ ವಿಷಯಗಳು ಮತ್ತು ಸ್ಮರಣೆಗೆ ಒತ್ತು ನೀಡುತ್ತವೆ.

ಈ ಸಮಸ್ಯೆಗಳನ್ನು ಬಗೆಹರಿಸುವುದಕ್ಕಾಗಿ ಎನ್.ಸಿ.ಎಫ್, ಮಂಡಳಿ ಪರೀಕ್ಷೆಯಲ್ಲಿ ಗಮನಾರ್ಹ ಬದಲಾವಣೆಗಳನ್ನು ಮಾಡುತ್ತದೆ. ಈ ಬದಲಾವಣೆಗಳು ಪರಸ್ಪರ ಸಂಬಂಧವನ್ನು ಹೊಂದಿವೆ ಹಾಗೂ ಒಟ್ಟಾರೆ ಪಠ್ಯಕ್ರಮ ವಿಧಾನದೊಂದಿಗೆ ಸಂಬಂಧಿಸಿದ ಅಂಶಗಳೊಂದಿಗೆ ಸಂಯೋಗವನ್ನು

ಸಾಧಿಸಿವೆ. ಕಲಿಕಾ ಮಾನದಂಡ, ವಿಷಯವಸ್ತು, ಪಠ್ಯಪುಸ್ತಕಗಳು, ಶಿಕ್ಷಣಶಾಸ್ತ್ರೀಯ ವಿಧಾನಗಳು ಹಾಗೂ ಇನ್ನೂ ಅನೇಕ ಅಂಶಗಳು ಇದರಲ್ಲಿ ಸೇರಿವೆ.

ವಿವಿಧ ಕ್ರಮಗಳ ಮೂಲಕ, ವಿದ್ಯಾರ್ಥಿಗಳ ಮೇಲೆ ಮಂಡಳಿ ಪರೀಕ್ಷೆಗಳು ಉಂಟು ಮಾಡುವ ಹೊರೆಯನ್ನು ತಗ್ಗಿಸಲಾಗುವುದು. ಉದಾಹರಣೆಗೆ, ಪರೀಕ್ಷೆಗಳನ್ನು 'ಸುಲಭ ಮತ್ತು ಲಘು'ವಾಗಿಸುವ ಮೂಲಕಃ ಅಂದರೆ ಕಡಿಮೆ ಕಠಿಣತೆಯನ್ನು ತರುವುದು ಎಂದರ್ಥವಲ್ಲ, ಇದಕ್ಕೆ ಬದಲಾಗಿ, ವಿಷಯಗಳನ್ನು ನೆನಪಿಸಿಕೊಳ್ಳುವ ಬದಲಿಗೆ ಸಾಮರ್ಥ್ಯದ ಮೇಲೆ ವಿಶೇಷ ಗಮನವನ್ನು ನೀಡಬೇಕಾಗುತ್ತದೆ. ಎಲ್ಲ ವಿಷಯಗಳಲ್ಲಿ ವಿಷಯದ ಭಾರವನ್ನು ಗಣನೀಯವಾಗಿ ತಗ್ಗಿಸಲಾಗುತ್ತದೆ.

ಎಲ್ಲ ಮಂಡಳಿ ಪರೀಕ್ಷೆಗಳನ್ನು ವರ್ಷಕ್ಕೆ ಕನಿಷ್ಠ ಎರಡು ಬಾರಿ ನಡೆಸಲಾಗುವುದು. ಈ ಮೂಲಕ ವಿದ್ಯಾರ್ಥಿಗಳಿಗೆ ಎರಡನೇ ಬಾರಿಗೆ ಪರೀಕ್ಷೆಯನ್ನು ಬರೆಯಲು ಮತ್ತು ಸುಧಾರಣೆ ತರಲು ಅವಕಾಶ ಮಾಡಿಕೊಡಲಾಗುತ್ತದೆ. ಅಂಕಪಟ್ಟಿಯಲ್ಲಿ ಗಳಿಸಿದ್ದರಲ್ಲಿ ಅತ್ಯುತ್ತಮ ಅಂಕವನ್ನು ಮಾತ್ರವೇ ದಾಖಲಿಸಲಾಗುತ್ತದೆ. ಕಾಲ ಕಳೆದಂತೆ ನಾವು 'ಬೇಡಿಕೆಯ ಮೇರೆಗೆ' ಪರೀಕ್ಷೆಗಳನ್ನು ನಡೆಸುವ ವ್ಯವಸ್ಥೆಯತ್ತ ಸಾಗಲಿದ್ದೇವೆ. ಅಂದರೆ ವಿದ್ಯಾರ್ಥಿಗಳು ಸಿದ್ಧರಾಗಿರುವಾಗ ಪರೀಕ್ಷೆಯನ್ನು ನಡೆಸುವುದು. ಈ ಕ್ರಮವು ಗಣನೀಯ ಪ್ರಮಾಣದಲ್ಲಿ ಒತ್ತಡವನ್ನು ತಗ್ಗಿಸಲಿದೆ. ಏಕೆಂದರೆ ಒಂದು ನಿರ್ದಿಷ್ಟ ದಿನದ ಸಾಧನೆಗಾಗಿ ವಿದ್ಯಾರ್ಥಿಗೆ ದಂಡವನ್ನು ವಿಧಿಸಲಾಗುವುದಿಲ್ಲ ಮಾತ್ರವಲ್ಲದೆ ತಮ್ಮ ನೈಜ ಕಲಿಕೆಯ ಸಂಭವನೀಯ ತಪ್ಪು ಮೌಲ್ಯಮಾಪನಕ್ಕೆ ಶಾಶ್ವತವಾದ ಕಪ್ಪು ಚುಕ್ಕೆಯು ಅಂಟಿಕೊಳ್ಳುವುದಿಲ್ಲ.

ಪಠ್ಯಕ್ರಮದಲ್ಲಿ ಹೇಳಿದಂತೆ, ಮಂಡಳಿ ಪರೀಕ್ಷೆಗಳು ಪ್ರೌಢ ಹಂತಕ್ಕಾಗಿ ಇರಬೇಕಾದ ಸಾಮರ್ಥ್ಯಗಳ ಸಾಧನೆಯ ಮೌಲ್ಯಮಾಪನ ನಡೆಸುತ್ತವೆ. ಈ ಪರೀಕ್ಷೆಗಳು, ಅಂತಹ ಸಾಮರ್ಥ್ಯಗಳಲ್ಲಿ ವಿದ್ಯಾರ್ಥಿ ಮಾಡಿರುವ ಸಾಧನೆಗಳ ಸಮಂಜಸ ಮತ್ತು ವಿಶ್ವಾಸಾರ್ಹ ಚಿತ್ರಣವನ್ನು ನೀಡುತ್ತವೆ. ಇದನ್ನು ಖಚಿತಪಡಿಸಿಕೊಳ್ಳುವುದಕ್ಕಾಗಿ ಪರೀಕ್ಷೆಯ ವಿನ್ಯಾಸದ ಎಲ್ಲ ಅಂಶಗಳ ಕುರಿತು ಕೆಲಸ ಮಾಡಬೇಕು. ಪರೀಕ್ಷೆಯನ್ನು ಅಭಿವೃದ್ಧಿಪಡಿಸುವವರ ಮತ್ತು ಮೌಲ್ಯಮಾಪಕರ ಸಮಂಜಸ ಆಯ್ಕೆ ಮತ್ತು ಅವರ ಸೂಕ್ತ ತರಬೇತಿ; ಪರೀಕ್ಷೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಸುಧಾರಣೆ; ಮತ್ತು ಮರುವಿನ್ಯಾಸಗೊಳಿಸಿದ ಪರೀಕ್ಷೆಗಳ ಪರಿಣಾಮಕಾರಿತ್ವ, ಸಿಂಧುತ್ವ ಮತ್ತು ವಿಶ್ವಾಸಾರ್ಹತೆಯ ನಿಯತ ಪರಿಶೀಲನೆ ಇದರಲ್ಲಿ ಒಳಗೊಂಡಿದೆ.

ಉನ್ನತ ಶಿಕ್ಷಣದ ಪ್ರವೇಶಾತಿ ವಿಧಾನಗಳು ಎನ್.ಸಿ.ಎಫ್ ನ ವ್ಯಾಪ್ತಿಯಲ್ಲಿ ಬರುವುದಿಲ್ಲ. ಆದರೆ ಇದು ವಿಷಯಗಳನ್ನು ಸ್ಪಷ್ಟವಾಗಿ ಹೇಳುತ್ತದೆ. ಸಾಮರ್ಥ್ಯದ ವಿಚಾರದಲ್ಲಿ ಹೇಳುವುದಾದರೆ, ಭಾರತದಲ್ಲಿ ಅಧಿಕ ಗುಣಮಟ್ಟದ ಉನ್ನತ ಶಿಕ್ಷಣ ಸಂಸ್ಥೆಗಳ (ಎಚ್.ಇ.ಐ ಗಳು) ಕೊರತೆ ಇದ್ದು, ಈ ಹಂತದ ಪ್ರವೇಶವನ್ನು 'ಹೊರಹಾಕುವ' ಆಯ್ಕೆಯ ಪ್ರಕ್ರಿಯೆಯ ಮೂಲಕ ನಡೆಸಲಾಗುತ್ತದೆ. ಲಕ್ಷಾಂತರ ವಿದ್ಯಾರ್ಥಿಗಳು ಕೆಲವೇ ಸಂಖ್ಯೆಯ ಎಚ್.ಇ.ಐ ಸೀಟುಗಳ ಬೆನ್ನು ಬೀಳುವಾಗ ಸಹಜವಾಗಿಯೇ ಸ್ಪರ್ಧೆಯು ಪ್ರಬಲವಾಗಿರುತ್ತದೆ. ಮಂಡಳಿ ಪರೀಕ್ಷೆಗಳಲ್ಲಿ, ಎಲ್ಲ ವಿದ್ಯಾರ್ಥಿಗಳು ಇತರ ವಿದ್ಯಾರ್ಥಿಗಳಂತೆಯೇ ಸಾಧನೆ ಮಾಡಬಹುದು. ಏಕೆಂದರೆ ಇವು ಕಲಿಕೆಯ ಮೌಲ್ಯಮಾಪನಗಳಾಗಿವೆ. ಆದರೆ ಉನ್ನತ ಶಿಕ್ಷಣದ ಪ್ರವೇಶಗಳಲ್ಲಿ ನಮ್ಮ ಸಾಮರ್ಥ್ಯದಲ್ಲಿ ಮಿತಿ ಇರುವುದರಿಂದ ಅನೇಕ ವಿದ್ಯಾರ್ಥಿಗಳು ಸೋಲೊಪ್ಪಿಕೊಳ್ಳುತ್ತಾರೆ.

ಈ ಬಿಕ್ಕಟ್ಟಿನ ಪರಿಹಾರವು ಶಾಲಾ ವ್ಯವಸ್ಥೆಯೊಳಗಿಲ್ಲ. ಮಂಡಳಿ ಪರೀಕ್ಷೆಗಳಿಗಿಂತಲೂ ಹೆಚ್ಚಾಗಿ ಪ್ರಸಕ್ತ ಪರಿಸ್ಥಿತಿಯು ಶಾಲಾ ವಿದ್ಯಾರ್ಥಿಗಳ ನಡುವೆ ಅನೇಕ ಗಂಭೀರ ಸಮಸ್ಯೆಗಳನ್ನು ಹುಟ್ಟು ಹಾಕಿದೆ. ಇದರಲ್ಲಿ ಅಧಿಕ ಒತ್ತಡ ಮತ್ತು ಗಂಭೀರ ಮಾನಸಿಕ ಆರೋಗ್ಯ ಸಮಸ್ಯೆಗಳು (ವಿದ್ಯಾರ್ಥಿಗಳು ಮಾತ್ರವಲ್ಲದೆ ಅವರ ಕುಟುಂಬದ ಸದಸ್ಯರನ್ನೂ ಬಾಧಿಸುತ್ತವೆ), ವಾಣಿಜ್ಯ ರೂಪದ ಕೋಚಿಂಗ್ ಮತ್ತು ಟ್ಯೂಷನ್, ನೈಜ ಕಲಿಕೆಗೆ ಒತ್ತು ನೀಡದೆ ಕಾಲೇಜಿನಲ್ಲಿ ಸ್ಥಾನ ಪಡೆಯುವುದಕ್ಕಾಗಿ ಪ್ರವೇಶ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುವುದು ಇತ್ಯಾದಿಗಳು ಶಾಲಾ ಶಿಕ್ಷಣದ ಮೂಲ ಉದ್ದೇಶವನ್ನೇ ದುರ್ಬಲಗೊಳಿಸುತ್ತಿವೆ.

ಈ ಸವಾಲುಗಳನ್ನು ಎದುರಿಸುವುದಕ್ಕಾಗಿ ರಾಷ್ಟ್ರೀಯ ಶಿಕ್ಷಣ ನೀತಿ 2020 (ಎನ್.ಇ.ಪಿ), ಅನೇಕ ಪ್ರತಿಕ್ರಿಯೆಗಳ ಸಮಗ್ರ ಗಣವನ್ನೇ ರೂಪಿಸಿದೆ. ಇದರಲ್ಲಿ ಈಗಾಗಲೇ ಜಾರಿಗೊಳಿಸಲಾದ ಸಾಮಾನ್ಯ ವಿಶ್ವವಿದ್ಯಾಲಯ ಪ್ರವೇಶ ಪರೀಕ್ಷೆಯಂತಹ ಕ್ರಮಗಳು ಒಳಗೊಂಡಿವೆ. ಆದರೆ ಈ ಬಿಕ್ಕಟ್ಟಿನ ಮೂಲ ಪರಿಹಾರವು ನಾವು ಹೊಂದಿರುವ ಅಧಿಕ ಗುಣಮಟ್ಟದ ಉನ್ನತ ಶಿಕ್ಷಣ ಸಂಸ್ಥೆಗಳ ಸಂಖ್ಯೆಯನ್ನು ಗಣನೀಯ ಪ್ರಮಾಣದಲ್ಲಿ ಹೆಚ್ಚಿಸುವುದರಲ್ಲಿದೆ. ಈ ನಿಟ್ಟಿನಲ್ಲಿ ಎನ್.ಇ.ಪಿ ಯು ಸ್ಪಷ್ಟವಾದ ದಾರಿಯನ್ನು ರೂಪಿಸಿದೆ. ಆದರೆ ಈ ಕನಸನ್ನು ನನಸಾಗಿಸಲು ಅಗತ್ಯವಿರುವ ಸುಸ್ಥಿರ ಕ್ರಮಗಳ ಪಟ್ಟಿಯನ್ನು ಗಮನಿಸಿದರೆ, ಇದೊಂದು ದೀರ್ಘ ಹೋರಾಟವಾಗಿದೆ ಎಂಬುದರಲ್ಲಿ ಎರಡು ಮಾತಿಲ್ಲ.

ಈ ಅಂಕಣವು ಮಂಡಳಿ ಪರೀಕ್ಷೆಗಳ ಮೇಲೆ ಮಾತ್ರವೇ ಗಮನ ಹರಿಸಿದೆ. ವಿವಿಧ ತರಗತಿಗಳಿಗಾಗಿ ಪರೀಕ್ಷೆ ನಡೆಸುವುದಕ್ಕಾಗಿ ಸಮಗ್ರ ಚೌಕಟ್ಟು ಮತ್ತು ವಿಸ್ತೃತ ಮಾರ್ಗಸೂಚಿಗಳನ್ನು ಎನ್.ಸಿ.ಎಫ್ ಹೊಂದಿದೆ. ನೈಜ ಕಲಿಕೆಯನ್ನು ಸಾಧ್ಯವಾಗಿಸುವುದಕ್ಕಾಗಿ ಮತ್ತು ಇದರ ಪ್ರಾಮಾಣಿಕ ಮೌಲ್ಯಮಾಪನವನ್ನು ನಡೆಸುವುದಕ್ಕಾಗಿ ಇವುಗಳನ್ನು ನಾವು ಬದಲಾಯಿಸಬೇಕು ಮತ್ತು ಸುಧಾರಣೆಯನ್ನು ತರಬೇಕು. ಭಾರತೀಯ ಶಿಕ್ಷಣವನ್ನು ಕುರಿತು ಹಳೆಯ ಚತುರೋಕ್ತಿಯ ಕುರಿತು ಎನ್.ಸಿ.ಎಫ್ ಗೆ ಚೆನ್ನಾಗಿ ತಿಳಿದಿದೆ: ನಮ್ಮಲ್ಲಿ ಪರೀಕ್ಷಾ ವ್ಯವಸ್ಥೆ ಇದೆಯೇ ಹೊರತು, ಶಿಕ್ಷಣ ವ್ಯವಸ್ಥೆಯಲ್ಲ.